**ವೇಮಗಲ್ ಸೋಮಶೇಖರ***

# ಬೆಂಗಳೂರು ವಸ್ತು ಸಂಗ್ರಹಾಲಯದಲ್ಲಿದ್ದ ಗ್ರಂಥ ಭಂಡಾರ

ಮದರಾಸಿನಲ್ಲಿ ವಸ್ತು ಸಂಗ್ರಹಾಲಯವನ್ನು ೧೮೫೧ರಲ್ಲಿ ಸ್ಥಾಪಿಸಿದ ಎಡ್ವರ್ಡ್ ಗ್ರೀನ್ ಬೆಲ್‌ಫರ್ ಅವರು ಬೆಂಗಳೂರಿಗೆ ೧೮೬೧ರಲ್ಲಿ ವರ್ಗವಾಗಿ ಬಂದು ನಂತರ ಇಲ್ಲಿಯೂ ಒಂದು ವಸ್ತು ಸಂಗ್ರಹಾಲಯವನ್ನು ಪ್ರಾರಂಭಿಸಬೇಕೆಂಬ ಉದ್ದೇಶದಿಂದ ಅವರು ೧೮೬೩ರಿಂದ ೧೮೬೫ರವರೆವಿಗೆ ಭಾರತ ದೇಶದ ಎಲ್ಲಾ ಮೂಲೆಗಳಿಂದ ಅನೇಕ ಅಪೂರ್ವವಾದಂತಹ ವಸ್ತುಗಳನ್ನು ಶೇಖರಿಸಿದರು. ಇವುಗಳಲ್ಲಿ ನೂರಾರು ಅಮೂಲ್ಯ ಗ್ರಂಥಗಳೂ ಇದ್ದವು. ಈ ಎಲ್ಲಾ ವಸ್ತುಗಳನ್ನು ೧೮-೮-೧೮೬೫ ರಂದು ಪ್ರಾರಂಭವಾದ ವಸ್ತು ಸಂಗ್ರಹಾಲಯದಲ್ಲಿ ಗ್ರಂಥ ಭಂಡಾರದ ವಿಭಾಗವನ್ನು ಪ್ರತ್ಯೇಕವಾಗಿ ಪ್ರಾರಂಭಿಸಲಾಯಿತು. ಹಾಗೆಯೇ ಒಬ್ಬ ಗ್ರಂಥಪಾಲಕನನ್ನು ಮಾಹೆಯಾನ ವೇತನ ೧೫ ರೂಪಾಯಿಗಳೊಂದಿಗೆ ನೇಮಿಸಲಾಯಿತು. ಬೆಲ್‌ಫರ್ ಅವರು ವೃತ್ತಿಯಲ್ಲಿ ವೈದ್ಯರಾಗಿದ್ದರೂ ಪ್ರವೃತ್ತಿಯಲ್ಲಿ ಸಂಶೋಧಕರಾಗಿ, ಗ್ರಂಥಕರ್ತರಾಗಿ, ಸಮಾಜ ಸೇವಕರಾಗಿ ಹಾಗೂ ನಾನಾ ಭಾಷೆಗಳನ್ನು ತಿಳಿದ ಭಾಷಾ ತಜ್ಞರಾಗಿದ್ದರು. ಆದ ಕಾರಣದಿಂದ ಇವರು ಗ್ರಂಥಾಲಯದ ಬಗ್ಗೆ ಬಹಳ ಶ್ರದ್ಧೆ ವಹಿಸಿ ಭದ್ರ ಬುನಾದಿಯನ್ನು ಹಾಕಿದರು. ಪ್ರತಿ ವರ್ಷ ಪುಸ್ತಕಗಳನ್ನು ಕೊಂಡುಕೊಳ್ಳುವುದರ ಮೂಲಕ, ಸರ್ಕಾರಿ ಮತ್ತು ಸಾರ್ವಜನಿಕರಿಂದ ದಾನವಾಗಿ ಪಡೆಯುವುದರ ಮೂಲಕ, ಪುಸ್ತಕ ಭಂಡಾರವನ್ನು ಹೆಚ್ಚಿಸುತ್ತಾ ೧೮೭೧ರ ವೇಳೆಗೆ ೩೯೮ ಪುಸ್ತಕಗಳನ್ನು ಸಂಗ್ರಹಿಸಿದ್ದರು.

೧೮೭೭ರ ನವೆಂಬರ್‌ನಲ್ಲಿ ಕಬ್ಬನ್ ಉದ್ಯಾನವನದಲ್ಲಿ ಪ್ರತ್ಯೇಕವಾಗಿ ವಸ್ತು ಸಂಗ್ರಹಾಲಯಕ್ಕಾಗಿಯೇ ನಿರ್ಮಿಸಿದ ಕಟ್ಟಡಕ್ಕೆ ದಂಡಿನ ಪ್ರದೇಶದಲ್ಲಿದ್ದ ಈ ವಸ್ತು ಸಂಗ್ರಹಾಲಯವನ್ನು ವರ್ಗಾಯಿಸಿದಾಗ ಗ್ರಂಥಾಲಯ ವಿಭಾಗವನ್ನು ಪಬ್ಲಿಕ್ ರೀಡಿಂಗ್ ರೂಮ್ ಆಗಿ ಪರಿವರ್ತಿಸಲಾಯಿತು. ಬೆಂಗಳೂರು ನಗರ ಮತ್ತು ದಂಡು ಪ್ರದೇಶಗಳ ಮಧ್ಯಭಾಗದಲ್ಲಿ ಈ ಕಟ್ಟಡವು ಇದ್ದುದರಿಂದ ಹೆಚ್ಚಿನ ಜನರು ಈ ಗ್ರಂಥಾಲಯಕ್ಕೆ ಬರತೊಡಗಿದರು. ಈ ವೇಳೆಗೆ ೫೧೯ ಪುಸ್ತಕಗಳು, ಅನೇಕ ನಿಯತಕಾಲಿಕೆಗಳು, ಸರ್ಕಾರಿ ವರದಿಗಳು, ಇತ್ಯಾದಿಗಳು ಶೇಖರವಾಗಿತ್ತು.

೧೮೮೭ರಲ್ಲಿ ಈ ಗ್ರಂಥ ಭಂಡಾರಕ್ಕಾಗಿಯೇ ಪ್ರತ್ಯೇಕವಾಗಿ ಸಂಗ್ರಹಾಲಯದ ಪೂರ್ವ ದಿಕ್ಕಿನ ಅಂದರೆ ಬಲಭಾಗದ ವಿಂಗ್ ರೂಮನ್ನು ಏರ್ಪಾಟು ಮಾಡಲಾಯಿತು. ೧೮೮೮ರಲ್ಲಿ ಮದರಾಸ್ ಸೆಂಟ್ರಲ್ ಮ್ಯೂಸಿಯಂ ಲೈಬ್ರರಿಯ ಸೂಪರಿಂಟೆಂಡೆಂಟ್ ಆದ ಡಾ|| ಇ. ಥರ್‌ಸ್ಟನ್ ಅವರ ಮಾರ್ಗದರ್ಶನದಿಂದ ಅಲ್ಲಿನ ಗ್ರಂಥಾಲಯದ ವ್ಯವಸ್ಥಾಕ್ರಮವನ್ನು ಇಲ್ಲಿಯೂ ಅಳವಡಿಸಿಕೊಳ್ಳಲಾಯಿತಲ್ಲದೆ, ಅಧ್ಯಯನ ಮತ್ತು ವಾಚನ ಮಾಡಲು ಬರುವವರಿಗಾಗಿ ಸುವ್ಯವಸ್ಥಿತ

* ೩೭೦, 'ದೀಪ' ಆನೆಯ ಅಡ್ಡರಸ್ತೆ, ಲಕ್ಷ್ಮೀಪುರ, ಕೆಂಪೇಗೌಡನಗರ, ಬೆಂಗಳೂರು-೫೬೦ ೦೧೯

ಏರ್ಪಾಟು ಮಾಡಿ ಒಂದು ಉತ್ತಮ ರೆಫರೆನ್ಸ್ ಲೈಬ್ರರಿಯಾಗಿ ಮಾರ್ಪಾಟು ಮಾಡಲಾಯಿತು. ಈ ವೇಳೆಗೆ ಇದ್ದ ಪುಸ್ತಕಗಳ ಸಂಖ್ಯೆ ೭೦೨.

೧೮೮೯ರಲ್ಲಿ ಮೈಸೂರು ವರ್ನ್ಯಾಕ್ಯುಲರ್ ಪ್ರೆಸ್‌ನ ಸೂಪರಿಂಟೆಂಡೆಂಟ್ ಆಗಿದ್ದ ಎ. ನರಸಿಂಹಯ್ಯಂಗಾರ್ ಅವರು ೨೩ ಕನ್ನಡ ಪುಸ್ತಕಗಳನ್ನು ಈ ಗ್ರಂಥ ಭಂಡಾರಕ್ಕೆ ದಾನವಾಗಿ ನೀಡಿದರು. ಮೈಸೂರಿನ ಮಾಜಿ ರೆಸಿಡೆಂಟ್ ಹಾಗೂ ಪ್ರಸಿದ್ಧ ಪ್ರಾಣಿ ಶಾಸ್ತ್ರಜ್ಞರಾಗಿದ್ದ ಕರ್ನಲ್ ಸರ್. ಆಲಿವರ್ ಸೆಂಟ್ ಜಾನ್ ಅವರು ೧೮೯೧ ರಲ್ಲಿ ತಮ್ಮ ಸ್ವಂತ ಸಂಗ್ರಹದಲ್ಲಿದ್ದ ಲಂಡನ್ ಜೂಆಲಜಿಕಲ್ ಸೊಸೈಟಿಯ ಕಾರ್ಯಕಲಾಪಗಳ ವರದಿಗಳನ್ನು ಮತ್ತು ಇತರೆ ಅಮೂಲ್ಯವಾದ ಪ್ರಾಣಿಶಾಸ್ತ್ರಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ಇಲ್ಲಿಗೆ ದಾನವಾಗಿ ನೀಡಿದರು. ಇದೇ ಸಮಯದಲ್ಲಿ ಸರಕಾರವು ವಿಶೇಷ ಧನಸಹಾಯವೆಂದು ೪೧೫ ರೂಪಾಯಿಗಳನ್ನು ನೀಡಿತು. ಈ ಹಣದಿಂದ Watt's Dictionary of Economic Products of India ಎಂಬ ಅಮೂಲ್ಯವಾದ ಸಂಪುಟವನ್ನು ಮತ್ತು ಇತರೆ ಸಂಪುಟಗಳನ್ನು ಖರೀದಿಸಲಾಯಿತು.

೧೮೯೪ ರಿಂದ ಪ್ರತಿ ವರ್ಷ ಹೆಚ್ಚಿನ ಹಣವು ಗ್ರಂಥ ಭಂಡಾರಕ್ಕೆ ಒದಗುತ್ತಾ ಬಂದಿತು. ೧೮೯೮ರಲ್ಲಿ ವಸ್ತು ಸಂಗ್ರಹಾಲಯದ ಕ್ಯುರೇಟರ್ ಆಗಿದ್ದ ಬಿ. ಶಾಂತಪ್ಪ ಚೆಟ್ಟಿಯವರು ಈ ಗ್ರಂಥಾಲಯ ಸಹಾಯದಿಂದ A Hand book on the uses of Country and Bazaar Medicines of India ಎಂಬ ಔಷಧಿಗಳ ಬಗೆಗಿನ ಪುಸ್ತಕವನ್ನು ಬರೆದು ವಸ್ತು ಸಂಗ್ರಹಾಲಯದಿಂದಲೇ ಪ್ರಕಟಿಸಿದರು. ಈ ಪುಸ್ತಕದಿಂದ ಸಾರ್ವಜನಿಕರಿಗೆ ಯಾವ ಕಾಯಿಲೆಗೆ ಯಾವ ಔಷಧವನ್ನು ಮನೆಯಲ್ಲೇ ಮಾಡಿಕೊಳ್ಳಬಹುದು ಎಂಬುದನ್ನು ತಿಳಿಯಲು ಬಹಳ ಅನುಕೂಲವಾಯಿತು. ೧೮೯೯ರಲ್ಲಿ ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ Evening Mail ಎಂಬ ಪತ್ರಿಕೆಯನ್ನು ಆ ಪತ್ರಿಕೆಯ ಮಾಲೀಕರು ಉಚಿತವಾಗಿ ಸರಬರಾಜು ಮಾಡಲು ಪ್ರಾರಂಭಿಸಿದರು.

ವಸ್ತು ಸಂಗ್ರಹಾಲಯದ ಮೇಲ್ವಿಚಾರಕರಾಗಿದ್ದ ಜೆ. ಕ್ಯಾಮರಾನ್ ಅವರು ೧೯೦೦ರಲ್ಲಿ ಬಾಂಬೆಯ ನ್ಯಾಚುರಲ್ ಹಿಸ್ಟ್ರಿ ಸೊಸೈಟಿಯ ಸದಸ್ಯರಾಗಿ ನೇಮಕಗೊಂಡಾಗ ಆ ಸೊಸೈಟಿಯಿಂದ ಪ್ರಕಟವಾಗುತ್ತಿದ್ದ ಎಲ್ಲಾ ಪುಸ್ತಕಗಳನ್ನೂ ಅರ್ಧ ಬೆಲೆಗೆ ಈ ಗ್ರಂಥಾಲಯಕ್ಕೋಸ್ಕರ ತರಿಸಿಕೊಂಡರು. ೧೯೧೦ರ ವರೆವಿಗೂ ಈ ಗ್ರಂಥ ಭಂಡಾರವು ಸಸ್ಯಶಾಸ್ತ್ರ, ಭೂಗರ್ಭಶಾಸ್ತ್ರ, ಪ್ರಾಣಿಶಾಸ್ತ್ರ ಮತ್ತು ಇತಿಹಾಸ ಅಧ್ಯಯನ ಮಾಡುವ ವಿದ್ಯಾರ್ಥಿಗಳಿಗೆ ತುಂಬಾ ಉಪಯುಕ್ತ ಕೇಂದ್ರವಾಗಿದ್ದಿತು. ೧೯೧೪ರ ವೇಳೆಗೆ ಈ ಗ್ರಂಥಾಲಯದಲ್ಲಿ ೧೭೩೧ ಪುಸ್ತಕಗಳು ಇದ್ದವು.

ಕಬ್ಬನ್ ಉದ್ಯಾನವನದಲ್ಲಿನ ಶೇಷಾದ್ರಿ ಅಯ್ಯರ್ ಮೆಮೋರಿಯಲ್ ಹಾಲ್‌ನಲ್ಲಿ ದಿನಾಂಕ ೧-೫-೧೯೧೫ ರಂದು ಸಾರ್ವಜನಿಕ ಗ್ರಂಥಾಲಯ ಪ್ರಾರಂಭಿಸಲ್ಪಟ್ಟಾಗ ಇಲ್ಲಿನ ಕೆಲವು ಪುಸ್ತಕಗಳನ್ನು ಅಲ್ಲಿಗೆ ವರ್ಗಾಯಿಸಲಾಯಿತು. ಅನಂತರ ೨೫-೧೧-೧೯೨೪ ರಂದು ೬೦ ಪುಸ್ತಕಗಳನ್ನು ಮಿಥಿಕ್ ಸೊಸೈಟಿಗೆ ವರ್ಗಾಯಿಸಲಾಯಿತು. ೧೯೨೬ರಲ್ಲಿ ಲೆಫ್ಟಿನೆಂಟ್ ಕೋಲ್ ಬ್ರೂಕ್ ಅವರು ಬರೆದ Twelve views of places in Mysore ಎಂಬ ಪುಸ್ತಕವನ್ನು ಬೆಂಗಾಲ-ನಾಗಪುರ್ ರೈಲ್ವೆಯ A.W. Hawkins ಅವರು ದಾನವಾಗಿ ನೀಡಿದರು.

೧೯೨೮ರಲ್ಲಿ ಡಾ|| ಎಮ್. ಎಚ್. ಕೃಷ್ಣ ಅಯ್ಯಂಗಾರ್ ಅವರು ಇಲ್ಲಿನ ನಾಣ್ಯ ಶಾಸ್ತ್ರಕ್ಕೆ ಸಂಬಂಧಪಟ್ಟ ಎಲ್ಲಾ ಪುಸ್ತಕಗಳನ್ನು ನಾಣ್ಯಗಳ ಪಟ್ಟಿಯನ್ನು ಸಿದ್ಧಪಡಿಸಲು ಉಪಯೋಗಿಸಿಕೊಂಡರು.

ಪುನಃ ಎರಡನೆಯ ಬಾರಿ ಅಂದರೆ ೧೯೩೨ರಲ್ಲಿ ನಾಣ್ಯಶಾಸ್ತ್ರ ಮತ್ತು ಚರಿತ್ರೆಗೆ ಸಂಬಂಧಿಸಿದ ಹಲವಾರ ಪುಸ್ತಕಗಳನ್ನು ಮಿಥಿಕ್ ಸೊಸೈಟಿಗೂ ಇನ್ನೂ ಕೆಲವು ಪುಸ್ತಕಗಳನ್ನು ವಿಶ್ವವಿದ್ಯಾನಿಲಯ ಮತ್ತು ಲಾಲ್ ಬಾಗ್‌ನ ಗ್ರಂಥ ಭಂಡಾರಗಳಿಗೂ ವರ್ಗಾಯಿಸಲಾಯಿತು.

ವಸ್ತುಸಂಗ್ರಹಾಲಯದ ಈ ಗ್ರಂಥ ಭಂಡಾರವು ೧೮೮೦ ರಿಂದ ೧೯೩೦ರ ವರೆವಿಗೂ ಬೆಂಗಳೂರು ನಗರ ಮತ್ತು ದಂಡು ಪ್ರದೇಶಕ್ಕೆ ಉತ್ತಮ ರೆಫರೆನ್ಸ್ ಲೈಬ್ರರಿಯಾಗಿತ್ತು.

## ಗ್ರಂಥ ಋಣ :


1) 1885 to 1935 Mysore Administration Annual Report
2) 1887 to 1935 Annual Report on the Mysore Govt. Museum.
3) Madras Government Museum Bulletins, Anthropology 1897 to 1899.